# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1401
2. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಡಾ|| ವೈ.ಎ.ನಾರಾಯಣ ಸ್ವಾಮಿ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 23.09.2021
4. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯದಲ್ಲಿನ "ಪ್ರಾಸಿಕ್ಯೂಷನ್ ರೇಟ್" ಎಷ್ಟು; | National Crime Records Bureau ಬಿಡುಗಡೆ ಮಾಡಿರುವ "Crime in India 2020" ವರದಿಯಲ್ಲಿನ ಅಂಶಗಳ ಪ್ರಕಾರ ಕರ್ನಾಟಕ ರಾಜ್ಯದಲ್ಲಿ 2020ನೇ ಸಾಲಿಗೆ ಸಂಬಂಧಿಸಿದಂತೆ ಶಿಕ್ಷೆ ಪ್ರಮಾಣ ಈ ಕೆಳಕಂಡಂತಿದೆ.<br>1. ಭಾ.ದ.ಸಂ. ಅಡಿಯಲ್ಲಿನ ಪ್ರಕರಣಗಳು - 51.2%<br>2. ವಿಶೇಷ ಕಾಯ್ದೆಯಡಿಯಲ್ಲಿನ ಪ್ರಕರಣಗಳು - 82.7% |
| ಆ | ಈ ಪ್ರಾಸಿಕ್ಯೂಷನ್ ರೇಟ್ ಭಾರತ ದೇಶದ ಸರಾಸರಿ ಪ್ರಾಸಿಕ್ಯೂಷನ್ ದರಕ್ಕಿಂತ ಎಷ್ಟು ವ್ಯತ್ಯಾಸವಿದೆ; | National Crime Records Bureau ಬಿಡುಗಡೆ ಮಾಡಿರುವ "Crime in India 2020" ವರದಿಯಲ್ಲಿನ ಅಂಶಗಳ ಪ್ರಕಾರ ರಾಷ್ಟ್ರಮಟ್ಟದಲ್ಲಿ 2020ನೇ ಸಾಲಿಗೆ ಸಂಬಂಧಿಸಿದಂತೆ ಶಿಕ್ಷೆ ಪ್ರಮಾಣ ಈ ಕೆಳಕಂಡಂತಿದೆ.<br>1. ಭಾ.ದ.ಸಂ. ಅಡಿಯಲ್ಲಿನ ಪ್ರಕರಣಗಳು - 59.02%<br>2. ವಿಶೇಷ ಕಾಯ್ದೆಯಡಿಯಲ್ಲಿನ ಪ್ರಕರಣಗಳು - 87.05% |
| ಇ | ಈ ಪ್ರಾಸಿಕ್ಯೂಷನ್ ರೇಟ್ ಇಷ್ಟು ಕಡಿಮೆ ಇರಲು ಕಾರಣ ಏನು; | • ಪ್ರಮುಖ ಸಾಕ್ಷಿದಾರರುಗಳು ನ್ಯಾಯಾಲಯಗಳಲ್ಲಿ ತನಿಖಾಧಿಕಾರಿಗಳ ಮುಂದೆ ನೀಡಿದ ಹೇಳಿಕೆಗೆ ವ್ಯತಿರಿಕ್ತವಾಗಿ ಅಭಿಯೋಜನೆ ಪಕ್ಷಕ್ಕೆ ಧಕ್ಕೆಯುಂಟಾಗುವ ರೀತಿ ಪ್ರತಿಕೂಲ ಸಾಕ್ಷ್ಯ ನುಡಿಯುವುದರಿಂದ ಪ್ರಮುಖವಾಗಿ ಶಿಕ್ಷೆಯ ಪ್ರಮಾಣ ಕಡಿಮೆ ಇರುತ್ತದೆ.<br>• ಪ್ರಮುಖ ಸಾಕ್ಷಿಗಳು ಪ್ರಕರಣದ ನ್ಯಾಯಯುತ ಇತ್ಯರ್ಥಕ್ಕೆ ಅವಶ್ಯಕವಾದ ಅಂಶಗಳ ಕುರಿತು ವ್ಯತಿರಿಕ್ತ ಸಾಕ್ಷ್ಯ ನುಡಿಯುವುದು.<br>• ಹಲವಾರು ಪ್ರಕರಣಗಳಲ್ಲಿ ನ್ಯಾಯಾಲಯದ ಹೊರಗೆ ಭಾದಿತರು ರಾಜಿ ಮಾಡಿಕೊಂಡು ಪ್ರತಿಕೂಲ ಸಾಕ್ಷಿ ನುಡಿಯುವಂತಹ ಕಾರಣಗಳಿಂದ. |
| ಈ | ಪ್ರಾಸಿಕ್ಯೂಷನ್ ರೇಟ್ ಹೆಚ್ಚಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | • ಪ್ರಕರಣದ ಸಾಕ್ಷಿಗಳು ನ್ಯಾಯಾಲಯದ ಮುಂದೆ ಪರಿಣಾಮಕಾರಿಯಾಗಿ ಸಾಕ್ಷ್ಯ ನುಡಿಯುವ ಬಗ್ಗೆ ಅವರಿಗೆ ಅಗತ್ಯ ಮಾಹಿತಿ ಮತ್ತು ಸಹಕಾರವನ್ನು ನೀಡುವ ಬಗ್ಗೆ ಅಭಿಯೋಜನಾಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿದೆ. |

| | | |
|---|---|---|
| | | • ಅಭಿಯೋಜಕರು ನ್ಯಾಯಾಲಯದ ಮುಂದೆ ಪರಿಣಾಮಕಾರಿಯಾಗಿ ವಾದ ಮಂಡಿಸಲು / ಅಭಿಯೋಜನಾ ಪ್ರಕರಣ ಮಂಡಿಸಲು ಮಾನ್ಯ ಸರ್ವೋಚ್ಛ ಹಾಗೂ ಉಚ್ಛ ನ್ಯಾಯಾಲಯಗಳ ತೀರ್ಪುಗಳನ್ನು ಉಲ್ಲೇಖಿಸಿ ಪ್ರಕರಣದ ವಸ್ತು ಸ್ಥಿತಿ ಮತ್ತು ಸನ್ನಿವೇಶಗಳಿಗೆ ಆ ತೀರ್ಪುಗಳನ್ನು ಅಳವಡಿಸಿಕೊಂಡು ವಾದ / ಪ್ರಕರಣಗಳನ್ನು ಮಂಡಿಸಲು ಸೂಚಿಸಲಾಗಿದೆ.<br>• ಅಭಿಯೋಜಕರುಗಳಿಗೆ ಕಾಲ ಕಾಲಕ್ಕೆ ತರಬೇತಿ / ಕಾರ್ಯಾಗಾರಗಳನ್ನು ಆಯೋಜಿಸುವ ಮುಖಾಂತರ ಆಯಾ ಕಾಯ್ದೆಗಳ ಕಲಂ, ನಿಯಮಗಳ ಕುರಿತು ಹೆಚ್ಚಿನ ಜ್ಞಾನಾರ್ಜನೆಗಾಗಿ ಸಂಪನ್ಮೂಲ ವ್ಯಕ್ತಿಗಳ ಮೂಲಕ ಉಪನ್ಯಾಸ ಕಾರ್ಯಕ್ರಮಗಳು ಹಮ್ಮಿಕೊಳ್ಳಲಾಗುತ್ತಿದೆ ಮತ್ತು ಆ ಮೂಲಕ ಅಭಿಯೋಜಕರುಗಳ ಕಾರ್ಯಕ್ಷಮತೆಯನ್ನು ಉತ್ತಮ ಪಡಿಸಲು ಕ್ರಮ ವಹಿಸಲಾಗುತ್ತಿದೆ. |

ಒಇ 199 ಪಿಪಿಇ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು